# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 242 |
| ಸದಸ್ಯರ ಹೆಸರು | : | ಶ್ರೀಮತಿ. ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು ) |
| ಉತ್ತರಿಸುವ ಸಚಿವರು | : | ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 02-02-2021 |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಕಳೆದ ಮೂರು ನಾಲ್ಕು ವರ್ಷಗಳಿಂದ ಸತತವಾಗಿ ಕಾಫಿ ಬೆಳೆ ಹಾಳಾಗಿರುವುದರಿಂದ, ಕಾಫಿ ಬೆಳೆಗಾರರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸೂಕ್ತ ಹಾಗೂ ನ್ಯಾಯಸಮ್ಮತ ಬೆಂಬಲಬೆಲೆ ನೀಡಿ ಕಾಫಿಯನ್ನು ಖರೀದಿ ಮಾಡುವ ಮೂಲಕ ಕಾಫಿ ಬೆಳೆಗಾರರ ನೆರವಿಗೆ ಸರ್ಕಾರ ಬಂದಿದೆಯೆ; | ಕಾಫಿ ಬೆಳೆಯು ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿ ಒಳಗೊಂಡಿರುವುದಿಲ್ಲ. |
| ಇ) | ಸತತವಾಗಿ ಸಂಕಷ್ಟದಲ್ಲಿರುವ ಕಾಫಿ ಬೆಳೆಗಾರರಿಗೆ ಆರ್ಥಿಕವಾಗಿ ಅನುಕೂಲವಾಗುವಂತೆ ಸರ್ಕಾರ ರೂಪಿಸಿರುವ ಶಾಶ್ವತ ಪರಿಹಾರ ಕ್ರಮಗಳೇನು; ಹಾಗೂ ಇದುವರೆಗೆ ಕಲ್ಪಿಸಲಾಗಿರುವ ಸೌಲಭ್ಯಗಳಾವುವು (ವಿವರ ನೀಡುವುದು) | ಸತತವಾಗಿ ಸಂಕಷ್ಟದಲ್ಲಿರುವ ಕಾಫಿ ಬೆಳೆಗಾರರಿಗೆ ಆರ್ಥಿಕವಾಗಿ ಅನುಕೂಲವಾಗುವಂತೆ NDRF/SDRF ಮಾರ್ಗಸೂಚಿಯನ್ವಯ ಬಹುವಾರ್ಷಿಕ ತೋಟಗಾರಿಕೆ ಬೆಳೆಗಳಿಗೆ ರೂ.18,000/ಹೆ. ಪರಿಹಾರ ಧನ ನಿಗದಿ ಪಡಿಸಿದ್ದು ಸದರಿ ಪರಿಹಾರ ಧನ ಪಡೆಯಲು ಕಾಫಿ ಬೆಳೆ ಹಾನಿ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಕಂದಾಯ ಇಲಾಖೆಯ ವಿಪತ್ತು ನಿರ್ವಹಣಾ ಕೋಶದ ಮೂಲಕ ಮೆಮೊರಾಂಡಮ್ ನ್ನು ಸಲ್ಲಿಸಲಾಗಿರುತ್ತದೆ.<br>ಮುಂದುವರೆದು, ಕಾಫಿ ಮಂಡಳಿ, ಬೆಂಗಳೂರುರವರು ನೀಡಿರುವ ಮಾಹಿತಿಯಂತೆ, ಕಾಫಿ ಮಂಡಳಿ ವತಿಯಿಂದ ಈ ಕೆಳಕಂಡ ಅಭಿವೃದ್ಧಿಉತ್ತೇಜಿತ ಕಾರ್ಯಕ್ರಮಗಳನ್ನು 10 ಹೆ. ವರೆಗೆ ಹೊಂದಿರುವ ಸಣ್ಣ ರೈತರುಗಳಿಗೆ ಘಟಕದ ವೆಚ್ಚಕ್ಕೆ ಶೇ. 40 ರಷ್ಟು ಆರ್ಥಿಕ ನೆರವನ್ನು ಈ ಕೆಳಕಂಡ ಕಾರ್ಯಕ್ರಮಗಳಿಗೆ ಒದಗಿಸಲಾಗಿರುತ್ತದೆ.<br>1) **ತೋಟ ಮರು ಸ್ಥಾಪನೆ**: ಕಾಫಿ ತೋಟಗಳಲ್ಲಿ ಉತ್ಪಾದನೆ ಹಾಗೂ ಉತ್ಪಾದಕತೆ ಹೆಚ್ಚಿಸುವ ಸಲುವಾಗಿ ಹಳೆಯ ಮತ್ತು ಅನುತ್ಪಾದಕ ಕಾಫಿ ತೋಟಗಳ ಪುನರುಜ್ಜೀವನ ಕಾರ್ಯಕ್ರಮವಾಗಿ ರೋಗ ನಿರೋಧಕ ಹಾಗೂ ಹೆಚ್ಚಿನ ಇಳುವರಿ ನೀಡುವ ಕಾಫಿ ತಳಿಗಳ ನಾಟಿ ಮಾಡಲು ಸಹಾಯಧನ ಕಲ್ಪಿಸಲಾಗಿರುತ್ತದೆ.<br>2) **ನೀರು ನಿರ್ವಹಣೆ ಘಟಕ**: ನೀರು ಶೇಖರಣಾ ಘಟಕಗಳ ಸ್ಥಾಪನೆಗೆ /ಯಂತ್ರೋಪಕರಣ ಖರೀದಿಗೆ ಆರ್ಥಿಕ ನೆರವು ಕಲ್ಪಿಸಲಾಗಿರುತ್ತದೆ. |

| | | |
|---|---|---|
| | | 3) **ಪರಿಸರಸ್ನೇಹಿ ಕಾಫಿ:** ರೈತರು ಹೆಚ್ಚಿನ ಆದಾಯಗಳಿಸಲು ಅನುಕೂಲವಾಗುವಂತೆ ಪರಿಸರ ಸ್ನೇಹಿ ಕಾಫಿ ಉತ್ಪಾದನೆಯ ಪ್ರಮಾಣೀಕರಣಕ್ಕೆ ಶೇ. 50 ರಂತೆ ಪ್ರಮಾಣೀಕರಣದ ವೆಚ್ಚವನ್ನು ಭರಿಸಲಾಗಿರುತ್ತದೆ.<br>4) **ಕಾಫಿ ಬೆಳೆಗಾರರ ಗುಂಪು/ಸ್ವಯಂ ಸೇವಕ ಸಂಘಗಳು/ಸಹಕಾರ ಸಂಘಗಳಿಗೆ ಪ್ರೋತ್ಸಾಹಧನ:** ಕಾಫಿ ಮಾರುಕಟ್ಟೆಗೆ ಉತ್ತೇಜಿಸಲು ಸಮುದಾಯತ್ವದಲ್ಲಿ ಕಾಫಿ ಬೆಳೆಗಾರರ ಗುಂಪು/ಸ್ವಯಂ ಸೇವಕ ಸಂಘಗಳು/ಸಹಕಾರ ಸಂಘಗಳಿಗೆ ಪ್ರತಿ ಕೆಜಿ ಕಾಫಿಗೆ ರೂ.4.00 ರಂತೆ ಪ್ರೋತ್ಸಾಹಧನವನ್ನು ನೀಡಲಾಗಿರುತ್ತದೆ. |

HORTI 40 HEG 2021

**(ಆರ್. ಶಂಕರ್)**

**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**